

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 599 |
| ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 10.03.2020 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಮರಳಿಗೆ ಅಭಾವ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರವು ದಿನಾಂಕ 12.08.2016 ರಂದು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಗಳು, 1994ಕ್ಕೆ ತಿದ್ದುಪಡಿ ತಂದು ತಿದ್ದುಪಡಿ ನಿಯಮಗಳು, 2016ನ್ನು ಜಾರಿಗೊಳಿಸಿರುತ್ತದೆ. ಸದರಿ ತಿದ್ದುಪಡಿ ನಿಯಮಾವಳಿಗಳಲ್ಲಿ ನದಿ ಪಾತ್ರದ ಮರಳು ಬ್ಲಾಕ್‌ಗಳನ್ನು ಸಾರ್ವಜನಿಕ ಟೆಂಡರ್ ಕಂ–ಹರಾಜು ಮೂಲಕ ವಿಲೇಪಡಿಸಲು, ಸರ್ಕಾರಿ ಕಾಮಗಾರಿಗಳಿಗೆ ಮೀಸಲಿರಿಸಲು, ಪಟ್ಟಾ ಜಮೀನು ಮರಳು ಗಣಿಗಾರಿಕೆಗೆ ಲೈಸನ್ಸ್ ನೀಡಲು, ಎಂ–ಸ್ಯಾಂಡ್ ಉತ್ಪಾದನೆಯನ್ನು ಪ್ರೋತ್ಸಾಹಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ರಾಜ್ಯದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳನ್ನು ಪೂರೈಕೆ ಮಾಡಲಾಗುತ್ತಿದೆ. ಅದ್ಯಾಗೂ ಸಹ ಕೆಲವು ಜಿಲ್ಲೆಗಳಲ್ಲಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಅಲ್ಪ ಪ್ರಮಾಣದ ಮರಳಿನ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಈ ಅಭಾವವನ್ನು ನೀಗಿಸಲು ಮರಳು ನೀತಿಯನ್ನು ಜಾರಿಗೆ ತರಲಾಗಿದೆಯೇ; | ರಾಜ್ಯದಲ್ಲಿ ಮರಳಿನ ಅಭಾವವನ್ನು ನೀಗಿಸಲು ಹಾಗೂ ಯೋಗ್ಯ ದರದಲ್ಲಿ ಮರಳು ದೊರಕುವಂತೆ ಮಾಡಲು ಪ್ರಸ್ತುತ ಇರುವ ನಿಯಮಗಳಂತೆಯೇ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆ ಮಾಡಲು ಕ್ರಮ ವಹಿಸಲಾಗುತ್ತಿದ್ದು, ವಿವರಗಳು ಈ ಕೆಳಕಂಡಂತಿರುತ್ತವೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-T ರಂತೆ, ರಾಜ್ಯದ ನದಿ ಪಾತ್ರಗಳಲ್ಲಿ 237 ಮರಳು ಬ್ಲಾಕ್‌ಗಳನ್ನು ಸಾರ್ವಜನಿಕ ಟೆಂಡರ್ ಕಂ ಹರಾಜು ಮೂಲಕ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ. 2019-20ನೇ ಸಾಲಿನ ಜನವರಿ ಅಂತ್ಯದ ವರೆಗೆ ಸದರಿ ಮರಳು ಬ್ಲಾಕ್‌ಗಳಿಂದ 16.82 ಲಕ್ಷ ಮೆಟ್ರಿಕ್ ಟನ್ ಮರಳನ್ನು ಸಾರ್ವಜನಿಕ ಕಾಮಗಾರಿಗಳಿಗೆ ಪೂರೈಸಲಾಗುತ್ತಿದೆ. |

--2

- ನಿಯಮ 31-S ರಂತೆ, ಸರ್ಕಾರಿ ಕಾಮಗಾರಿಗಳಿಗೆ ರಾಜ್ಯದ ನದಿ ಪಾತ್ರಗಳಲ್ಲಿ **18 ಮರಳು** ಬ್ಲಾಕ್‌ಗಳನ್ನು ಸರ್ಕಾರಿ ಇಲಾಖೆ / ಸಂಸ್ಥೆಗಳಿಗೆ ಮಂಜೂರು ಮಾಡಲಾಗಿರುತ್ತದೆ. ಈ ಮರಳು ಬ್ಲಾಕ್‌ಗಳಲ್ಲಿ **2019-20**ನೇ ಸಾಲಿನ ಜನವರಿ ಅಂತ್ಯದವರೆಗೆ 1.34 ಲಕ್ಷ ಮೆಟ್ರಿಕ್ ಟನ್ ಮರಳು ಗಣಿಗಾರಿಕೆ ನಡೆಸಿ, ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ.
- ನಿಯಮ 31-ZA ರಂತೆ, ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗಾಗಿ **44 ಲೈಸನ್ಸ್** ಮಂಜೂರು ಮಾಡಲಾಗಿರುತ್ತದೆ. 2017-18ನೇ ಸಾಲಿನ ಜನವರಿ ಅಂತ್ಯದವರೆಗೆ 2.95 ಲಕ್ಷ ಮೆಟ್ರಿಕ್ ಟನ್ ಮರಳು ಗಣಿಗಾರಿಕೆ ನಡೆಸಿ, ಸಾರ್ವಜನಿಕರಿಗೆ ವಿತರಿಸಲಾಗಿರುತ್ತದೆ.
- ನಿಯಮ **31-ZB ರಂತೆ,** ಕರಾವಳಿ ನಿಯಂತ್ರಣ ವಲಯಗಳಲ್ಲಿ 30 ಮರಳು ದಿಬ್ಬಗಳಲ್ಲಿ ಮರಳು ತೆರವುಗೊಳಿಸಲು ಕರ್ನಾಟಕ ಕರಾವಳಿ ವಲಯ ನಿಯಂತ್ರಣ ಪ್ರಾಧಿಕಾರದಿಂದ ಅನುಮತಿ ಪಡೆಯಲಾಗಿರುತ್ತದೆ. ಅದರಂತೆ, ಸದರಿ ಮರಳು ದಿಬ್ಬಗಳಿಂದ 2019-20ನೇ ಸಾಲಿನ ಜನವರಿ ಅಂತ್ಯದವರೆಗೆ 7.08 ಲಕ್ಷ ಮೆಟ್ರಿಕ್ ಟನ್ ಮರಳನ್ನು ತೆರವುಗೊಳಿಸಿ, ಸಾರ್ವಜನಿಕರಿಗೆ ವಿತರಿಸಲಾಗಿರುತ್ತದೆ.
- ನಿಯಮ **31-ZC ರಂತೆ,** ಪ್ರಸ್ತುತ ರಾಜ್ಯದಲ್ಲಿ ಒಟ್ಟು 289 ಎಂ-ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಸದರಿ ಎಂ-ಸ್ಯಾಂಡ್ ಘಟಕಗಳಿಂದ ವಾರ್ಷಿಕ ಅಂದಾಜು 30 ದಶಲಕ್ಷ ಮೆಟ್ರಿಕ್ ಟನ್ ಎಂ-ಸ್ಯಾಂಡನ್ನು ಉತ್ಪಾದಿಸಲಾಗುತ್ತಿದ್ದು, ಸರ್ಕಾರಿ ಮತ್ತು ಸಾರ್ವಜನಿಕ ಕಾಮಗಾರಿಗಳಿಗೆ ಪೂರೈಕೆಯಾಗುತ್ತಿದೆ.
- ಮುಂದುವರೆದು, ದಿನಾಂಕ **16.11.2017** ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ಕ್ಕೆ ತಿದ್ದುಪಡಿ ಮಾಡಿ, ನಿಯಮ **31-ZF & 31-ZG** ರಲ್ಲಿ ವಿದೇಶಗಳಿಂದ ರಾಜ್ಯಕ್ಕೆ ಮರಳು ಪೂರೈಕೆ ಮಾಡಲು ಅವಕಾಶ ಕಲ್ಪಿಸಲಾಗಿದೆ. ಆದುದರಿಂದ, **49,213** ಮೆಟ್ರಿಕ್ ಟನ್ ವಿದೇಶದಿಂದ ಆಮದಾದ ಮರಳನ್ನು ಸಾರ್ವಜನಿಕ ಕಾಮಗಾರಿಗಳಿಗೆ ಪೂರೈಸಲಾಗುತ್ತಿದೆ.
- ದಿನಾಂಕ: **01.10.2019** ರ ಸರ್ಕಾರದ ಆದೇಶ ಸಂಖ್ಯೆ: ಸಿಐ 213 ಎಂಎಂಎನ್ **2019** ರಂತೆ ಪ್ರವಾಹದಿಂದ ನದಿಗಳ ಪಕ್ಕದ ಕೃಷಿ ಜಮೀನುಗಳಲ್ಲಿ ಸಂಗ್ರಹವಾಗಿರುವ 1,54,616 ಮೆಟ್ರಿಕ್ ಟನ್ ಮರಳನ್ನು ಸ್ಥಳೀಯ ಕಾಮಗಾರಿಗಳಿಗೆ ನೀಡಲಾಗಿರುತ್ತದೆ.
- ಆದಾಗ್ಯೂ ಸಹ ಮರಳಿನ ಬೇಡಿಕೆ ಹಾಗೂ ಸರಬರಾಜಿನಲ್ಲಿ ಅಲ್ಪಪ್ರಮಾಣದ ವ್ಯತ್ಯಾಸವಿರುವ ಕಾರಣ ಈ ವ್ಯತ್ಯಾಸದ ಮರಳಿನ ಪ್ರಮಾಣವನ್ನು ಸರಿದೂಗಿಸಲು ರಾಜ್ಯದಲ್ಲಿ ಮರಳು ನೀತಿ ಜಾರಿಗೆ ತರುವ ಕುರಿತು ರೂಪುರೇಷೆಗಳನ್ನು ಸಿದ್ಧಪಡಿಸಲಾಗುತ್ತಿದ್ದು, ಸರ್ಕಾರದಿಂದ ಶೀಘ್ರದಲ್ಲಿ ಹೊಸ ಮರಳು ನೀತಿಯನ್ನು ಜಾರಿಗೆ ತರಲು ಕ್ರಮವಹಿಸಲಾಗುತ್ತಿದೆ.

| | | |
|---|---|---|
| ಇ. | ಸದರಿ ನೀತಿಯ ರೂಪುರೇಷೆಗಳೇನು; (ವಿವರ ನೀಡುವುದು) | ಮರಳು ನೀತಿಯ ರೂಪುರೇಷೆಗಳನ್ನು ಅಂತಿಮಗೊಳಿಸಲಾಗುತ್ತಿದ್ದು, ಹೊಸ ಮರಳು ನೀತಿಯಲ್ಲಿ ಸೇರ್ಪಡೆಗೊಳಿಸಲಾಗುವುದು. |
| ಈ. | ಸದರಿ ಮರಳು ನೀತಿಯಿಂದ ಸರ್ಕಾರದ ಯೋಜನೆಯ ಫಲಾನುಭವ ಪಡೆದು, ನಿವೇಶನಗಳಲ್ಲಿ ಮನೆ ನಿರ್ಮಾಣ ಮಾಡುವವರಿಗೆ ಯಾವುದಾದರೂ ರಿಯಾಯಿತಿ ಸೌಲಭ್ಯಗಳನ್ನು ಕಲ್ಪಿಸಲಾಗಿದೆಯೇ; | ಹೊಸ ಮರಳು ನೀತಿ ಜಾರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. ಸದರಿ ಮರಳು ನೀತಿಯ ಜಾರಿ ಸಂಬಂಧ ಸರ್ಕಾರದ ಹಂತದಲ್ಲಿ ನಡೆದ ಸಭೆಯಲ್ಲಿ ಸರ್ಕಾರದ ಯೋಜನೆಯ ಫಲಾನುಭವ ಪಡೆದು ನಿವೇಶನಗಳು ಮನೆ ಮಾಡುವವರಿಗೆ ರಿಯಾಯಿತಿ ಸೌಲಭ್ಯ ಕಲ್ಪಿಸುವ ಬಗ್ಗೆ ಚರ್ಚಿಸಲಾಗಿರುತ್ತದೆ. |
| ಉ) | ಖಾಸಗಿಯವರನ್ನು ಹೊರತುಪಡಿಸಿ, ಸರ್ಕಾರದ ಇಲಾಖಾ ವತಿಯಿಂದ ಕಡಿಮೆ ಮೊತ್ತದಲ್ಲಿ ಮರಳು ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಸರ್ಕಾರದ ಇಲಾಖೆ ವತಿಯಿಂದ ಗ್ರಾಹಕರಿಗೆ ಕೈಗೆಟುಕುವ ದರದಲ್ಲಿ ಮರಳು ಒದಗಿಸಲು ರೂಪುರೇಷೆಗಳನ್ನು ಅಂತಿಮಗೊಳಿಸಲಾಗುತ್ತಿದೆ. |

ಸಂಖ್ಯೆ: ಸಿಐ 112 ಎಂಎಂಎನ್ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು